


# ಜ್ಯೋತಿಷ ಮಿತ್ರ

ಆನ್ಲೈನ್ ದಿನಪತ್ರಿಕೆ

॥ ವೇದೋಽಖಿಲೋ ಧರ್ಮಮೂಲಮ್ ॥

www.jyothishamithra.com

ಸಂಚಿಕೆ : 872 02-01-2021 ಶನಿವಾರ

ಶಾರ್ವರಿಸಂವತ್ಸರ ಉತ್ತರಾಯಣ ಹೇಮಂತಋತು ಮಾರ್ಗಶಿರಮಾಸ ಕೃಷ್ಣಪಕ್ಷ

## ನಿತ್ಯ ಪಂಚಾಂಗ

ತಿಥಿ : ತದಿಗೆ ( ಗಂಟೆ 09.09ರ ವರೆಗೆ )

ನಕ್ಷತ್ರ : ಆಶ್ಲೇಷಾ ( ಗಂಟೆ 20.16ರ ವರೆಗೆ )

ರಾಹುಕಾಲ : 09.44 AM - 11.09 AM

ಗುಳಿಕಕಾಲ : 06.52 AM - 08.18 AM

## ಸುಜ್ಞಾನ

ಸತ್ಯವನ್ನು ಹೇಳುವಾಗ ಆದಷ್ಟು ಪ್ರೀತಿಯಿಂದ, ಒಳ್ಳೆಯ ರೀತಿಯಿಂದ ಹೇಳಬೇಕು. ಇಲ್ಲವಾದಲ್ಲಿ ಸತ್ಯದ ಆ ಸಂದೇಶ ಮತ್ತು ಸಂದೇಶ ನೀಡುವ ವ್ಯಕ್ತಿ ಇಬ್ಬರೂ ತಿರಸ್ಕರಿಸಲ್ಪಡುವ ಸಾಧ್ಯತೆಯೇ ಹೆಚ್ಚು.

# ಸಪ್ತ ಚಕ್ರಗಳ ವಿಚಾರ

ಮಾನವನ ದೇಹದಲ್ಲಿ ಪ್ರಧಾನವಾಗಿ ಏಳು ಚಕ್ರಗಳು ಕಂಡುಬರುತ್ತವೆ.ಈ ಪ್ರತಿಯೊಂದು ಚಕ್ರಗಳಿಗೂ ಪ್ರತ್ಯೇಕ ಆಧ್ಯಾತ್ಮಿಕ / ಮಾನಸಿಕ ಗುಣಲಕ್ಷಣಗಳಿವೆ. ಯಾವುದೇ ಚಕ್ರದ ವಿಶೇಷ ಮೂಲಬೀಜ ಮಂತ್ರದ ಜಪ ಮಾಡುವುದರಿಂದ ಅದರಲ್ಲಿರುವ ಶಕ್ತಿಗಳು ಜಾಗೃತವಾಗುತ್ತವೆ. ಉದಾಹರಣೆಗೆ ಮಹಾಕವಿ

ಕಾಳಿದಾಸನ ಮನಸ್ಸಿನಲ್ಲಿ ತಾನು ಶ್ರೇಷ್ಠಮಟ್ಟದ ವಿದ್ವಾಂಸನಾಗ ಬೇಕೆಂಬ ಏಕಮಾತ್ರ ಉದ್ದೇಶವಿತ್ತು ಮತ್ತು ಈ ಭಾವನೆಯ ಕಾರಣದಿಂದಲೇ ವಿಶುದ್ಧ ಚಕ್ರದ ಕೇವಲ ಒಂದು ದಳದ ಜಪ ಮಾಡಿದ ಮತ್ತು ಅದು ಸರಸ್ವತಿ ಶಕ್ತಿ ಪ್ರಧಾನವಾದ ಕಾರಣ ಶ್ರೇಷ್ಠ ಮಟ್ಟದ ವಿದ್ವಾಂಸನಾದ.



**1.ಮೂಲಾಧಾರ ಚಕ್ರ** : ಲೌಕಿಕ ಸುಖ, ಆಸ್ತಿಪಾಸ್ತಿ, ಅಧಿಕಾರ, ಇಂದ್ರಿಯಗಳ ಸುಖ, ಹಣಕಾಸು.

**2.ಸ್ವಾಧಿಷ್ಠಾನ ಚಕ್ರ** : ಸಂಭೋಗ, ಸೃಜನಾತ್ಮಕ ವಿಚಾರ.

**3.ಮಣಿಪೂರ ಚಕ್ರ** : ಭಾವನೆ, ಸ್ವಾಭಿಮಾನ,ತಡೆ ರಹಿತ

ಬದುಕು.

**4.ಅನಾಹತ ಚಕ್ರ : ಮಾನಸಿಕ – ಆಧ್ಯಾತ್ಮಿಕ ಸುಖ, ಪ್ರೀತಿ, ಭಕ್ತಿ.**

**5.ವಿಶುದ್ಧ ಚಕ್ರ : ಅಳು,ನಗು,ಪ್ರೀತಿ,ಸುಖ,ದುಃಖ, ಕೋಪ.**

**6.ಆಜ್ಞಾ ಚಕ್ರ : ಇಚ್ಛಾಶಕ್ತಿ, ಜ್ಞಾಪಕ ಶಕ್ತಿ, ಮನೋಬಲ, ಅಂತರ್ ದೃಷ್ಟಿ, ಕಲ್ಪನೆ.**

**7.ಸಹಸ್ರಾರ ಚಕ್ರ : ಜ್ಞಾನೋದಯ.**

| ಚಕ್ರ | ತತ್ತ್ವ | ಬೀಜಮಂತ್ರ |
| --- | --- | --- |
| ಮೂಲಾಧಾರ | ಪೃಥ್ವಿ | ಲಂ |
| ಸ್ವಾಧಿಷ್ಠಾನ | ಜಲ | ವಂ |
| ಮಣಿಪೂರ | ಅಗ್ನಿ | ರಂ |
| ಅನಾಹತ | ವಾಯು | ಯಂ |
| ವಿಶುದ್ಧ | ಆಕಾಶ | ಹಂ |
| ಆಜ್ಞಾ | ದಿವ್ಯಶಕ್ತಿಗಳು | ಕ್ಷಂ |
| ಸಹಸ್ರಾರ | ಬ್ರಹ್ಮ | ಓಂ |




# ಶುಕ್ರದಶಾ ಫಲಾಫಲ

ಇದು ಕುಂಭ ಲಗ್ನ ಜಾತಕ.10-03-2012 ರಿಂದ 10-03-2032ರ ವರೆಗೆ ಶುಕ್ರದಶಾ ಕಾಲವಾಗಿರುತ್ತದೆ. ಕುಂಭ ಲಗ್ನಕ್ಕೆ ಶುಕ್ರ ಯೋಗಕಾರಕನಾಗಿರುವನು.

| | | | |
|---|---|---|---|
| ರವಿ ಬುಧ ಗುರು | ಶುಕ್ರ | | ರಾಹು |
| ಲಗ್ನ ಕುಜ ಶನಿ ಚಂದ್ರ | ಗಂಡು<br>14-03-1964<br>6 AM | | |
| | | | |
| ಕೇತು | | | |

ಶುಕ್ರನು 4 ಮತ್ತು 9ನೇ ಅಧಿಪತಿಯಾಗಿ ದುಸ್ಥಾನವಾದ ತೃತೀಯದಲ್ಲಿ ಸ್ವನಕ್ಷತ್ರದಲ್ಲಿದ್ದು ಶನಿ ನೋಡುವನು. ಶುಕ್ರನು ಸ್ಥಿತನಾಗಿರುವುದು ಅಗ್ನಿರಾಶಿಯಲ್ಲಿ. ತಾಯಿ, ವಿದ್ಯಾಭ್ಯಾಸ, ಆಸ್ತಿ, ಸಂಪತ್ತು, ಮನೆ, ವಾಹನ, ಚಿನ್ನಾಭರಣ, ಭೂಮಿ ಯೋಗವನ್ನು ಚತುರ್ಥ ಭಾವದಿಂದ ತಿಳಿದುಕೊಳ್ಳಬೇಕು. ತಂದೆ, ಗುರು

ಹಿರಿಯರು, ದೇವತಾರಾಧನೆ, ತೀರ್ಥಯಾತ್ರೆ, ತಪಸ್ಸು, ಸುಕೃತ, ದೂರ ಪ್ರಯಾಣ, ಭಾಗ್ಯ ಪ್ರಾಪ್ತಿಯನ್ನು ನವಮ ಭಾವದಿಂದ ತಿಳಿದುಕೊಳ್ಳಬೇಕು.

ಚತುರ್ಥ-ನವಮಾಧಿಪತಿ ಶುಕ್ರನು ತೃತೀಯ ಸ್ಥಾನದಲ್ಲಿದ್ದು ಶನಿ ವೀಕ್ಷಿಸುವುದರಿಂದ ವಾಹನಾಪಘಾತ ಭಯ, ಸ್ತ್ರೀಯರ ಮೂಲಕ ದೋಷಾರೋಪಣೆ, ಅಪವಾದ, ನಿಂದನೆ, ಭೂಮಿ, ಮನೆ, ಆಸ್ತಿ ಕಲಹ, ಸೋದರ-ಸೋದರಿಯರ ಜೊತೆ ಮನಸ್ತಾಪ, ವಿರೋಧ ಅಥವಾ ಇವರಿಗೆ ತೊಂದರೆಯಾಗಿ ಇದೇ ದುಃಖ ವಿಚಾರವಾಗುವುದು.ಶುಕ್ರ ವಿವಾಹ ಕಾರಕನಾಗಿರುವುದರಿಂದ ವಿವಾಹ ಜೀವನದಲ್ಲಿ ನೋವು, ಪತ್ನಿ ಅಥವಾ ಜಾತಕರಿಗೆ ಆಪರೇಷನ್ ಸಂಭವ.

ಕುಂಭ ಲಗ್ನಕ್ಕೆ ಶುಕ್ರ ಭಾದಕಾಧಿಪತಿ ಆಗಿರುವುದರಿಂದ ಸ್ತ್ರೀ ದೇವತಾ ಕೋಪ, ಸ್ತ್ರೀ ಶಾಪ, ಈ ದೆಶೆಯಲ್ಲಿ ಜೀವಕ್ಕೂ ತೊಂದರೆಯಾಗಬಹುದು. ಚಂಡಿಪಾರಾಯಣ, ರುದ್ರಶಾಂತಿ, ಶನಿಶಾಂತಿ, ದುರ್ಗಾರಾಧನೆ, ಶುಕ್ರವಾರ ವೃತ, ಶುಕ್ರಯಂತ್ರಕ್ಕೆ ಪೂಜೆ ಮಾಡುವುದರಿಂದ ಕಂಟಕ ಪ್ರಮಾದಗಳಿಂದ ಪಾರಾಗಬಹುದು.

SPECIAL OFFER

# ಪೆಂಡ್ಯೂಲಮ್ ಡೌಸಿಂಗ್

## ತರಬೇತಿ ಕಿಟ್

ನಿಮ್ಮ ಎಲ್ಲಾ ಪ್ರಶ್ನೆಗಳಿಗೆ ನಿಖರವಾದ
ಉತ್ತರವನ್ನು ತಿಳಿಯಲು
ಪೆಂಡ್ಯೂಲಮ್‌ನಿಂದ
ಮಾತ್ರ ಸಾಧ್ಯ

Rs. 1200 ONLY

ಪಂಚಾಂಗ ಕ್ಲಾಸ್ ಉಚಿತ

ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ:

**9986671473, 9535283535**


ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್

ಸಂಪಾದಕರು : ಶ್ರೀಷ ಎಸ್.

ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535

jmonline@gmail.com www.jyothishamithra.com